# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 653

02. ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ. ಲಹರ್‌ಸಿಂಗ್ ಸಿರೋಯಾ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 12-03-2020

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಾದಕ ವಸ್ತುಗಳಾದ ಎಲ್.ಎಸ್.ಡಿ, ಗಾಂಜಾ, ಡ್ರಗ್ಸ್‌ಗಳ ಮಾರಾಟ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಡ್ರಗ್ಸ್‌ಗಳ ಮಾರಾಟದ ದಂಧೆಗೆ ಕಡಿವಾಣ ಹಾಕಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಮಾದಕ ವಸ್ತುಗಳ ಮಾರಾಟ ದಂಧೆಗೆ ಕಡಿವಾಣ ಹಾಕಲು ಸರ್ಕಾರದ ವತಿಯಿಂದ ಕೈಗೊಳ್ಳಲಾಗುತ್ತಿರುವ ಕ್ರಮಗಳ ವಿವರವನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |

ಒಇ 05 ಪಿಎನ್‌ಡಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

## ಅನುಬಂಧ-2:

## ಮಾದಕ ವಸ್ತುಗಳ ಅಕ್ರಮ ಸಾಗಾಣಿಕೆ & ಮಾರಾಟ ತಡೆಗಟ್ಟಲು ಕೈಗೊಂಡಿರುವ ಕ್ರಮಗಳ ವಿವರ

- ಮಾದಕ ವಸ್ತುಗಳ ಅಕ್ರಮ ಸಾಗಾಣಿಕೆ & ಮಾರಾಟ ತಡೆಗಟ್ಟಲು ಮತ್ತು ಮಾದಕ ವಸ್ತುಗಳ ನಿಯಂತ್ರಣಕ್ಕೆ ಸಾರ್ವಜನಿಕರ ಸಹಬಾಗಿತ್ವವನ್ನು ಪರಿಣಾಕಾರಿಯಾಗಿ ಉಪಯೋಗಿಸಿಕೊಳ್ಳಲು ಅನುಕೂಲವಾಗುಂತೆ ಹಾಗೂ ಸಾರ್ವಜನಿಕರು ಈ ಬಗ್ಗೆ ಸಕಾಲದಲ್ಲಿ ಮಾಹಿತಿಯನ್ನು ನೀಡಲು ಪ್ರತ್ಯೇಕ ಟೋಲ್ ಫ್ರೀ ನಂ 1908 ಅನ್ನು ಕಾರ್ಯಾಚರಣೆಗೆ ಅಳವಡಿಸಲಾಗಿದೆ.

- ಹೊರ ರಾಜ್ಯಗಳಿಂದ ಹೆಚ್ಚಿನ ಮಾದಕ ವಸ್ತುಗಳು ಸರಬರಾಜಾಗುವ ಕುರಿತು, ಸದರಿ ಜಾಲವನ್ನು ನಿಯಂತ್ರಿಸಲು ಎಫ್‌ಆರ್‌ಆರ್‌ಓ, ಎನ್‌ಸಿಬಿ, ರೈಲ್ವೆ, ಕಸ್ಟಂ, ಅಬಕಾರಿ, ಕಂದಾಯ, ಗುಪ್ತದಳ ಮತ್ತು ಶಿಕ್ಷಣ ಇಲಾಖೆಯ ಉನ್ನತ ಮಟ್ಟದ ಅಧಿಕಾರಿಗಳೊಂದಿಗೆ ಸಮನ್ವಯ ಸಭೆ ನಡೆಸಲಾಗುತ್ತಿದೆ.

- ಶಾಲಾ ಕಾಲೇಜುಗಳು, ವಿದೇಶಿಯರು ವಾಸಿಸುತ್ತಿರುವ ಪ್ರದೇಶಗಳು, ಮತ್ತು ಕೊಳಚೆ ಪ್ರದೇಶಗಳಲ್ಲಿ ವ್ಯಾಪಕ ಪ್ರಚಾರ ಕೈಗೊಳ್ಳಲು ಹಾಗೂ ಸಾರ್ವಜನಿಕರಲ್ಲಿ ಮಾದಕ ವಸ್ತುಗಳ ಸೇವನೆ ವಿರುದ್ಧ ಜಾಗೃತಿ ಮೂಡಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಮಾದಕ ದ್ರವ್ಯದ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಶಾಲಾ-ಕಾಲೇಜುಗಳಲ್ಲಿ ಡ್ರಗ್ ಅವೇರ್‌ನೆಸ್ ಪ್ರೋಗ್ರಾಮ್ ಗಳನ್ನು ಏರ್ಪಡಿಸಿ ವಿದ್ಯಾರ್ಥಿ ಯುವಜನತೆಗಳಲ್ಲಿ ಅರಿವು ಮೂಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಠಾಣಾ ಸರಹದ್ದಿನ ಬೀಟ್ ಮತ್ತು ಸಬ್-ಬೀಟ್‌ಗಳಲ್ಲಿ ಹಾಗ್ಗಿಂದಾಗ್ಗೆ ಸಭೆಯನ್ನು ನಡೆಸಿ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

- ಶಾಲಾ ಕಾಲೇಜುಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳಿಗೆ ಮಾದಕ ವಸ್ತುಗಳ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ವಿದ್ಯಾರ್ಥಿಗಳಿಗೆ ಉಪನ್ಯಾಸದ ಮೂಲಕ ವಿವರವಾಗಿ ತಿಳುವಳಿಕೆ ನೀಡಲಾಗುತ್ತಿದೆ.

- ವಿದೇಶಿಯರು ವಿಶೇಷವಾಗಿ ನೈಜೀರಿಯನ್ಸ್ ಪ್ರಜೆಗಳು ಮಾದಕ ವಸ್ತುಗಳ ಮಾರಾಟ/ಸೇವನೆಯ ಪ್ರಕರಣಗಳಲ್ಲಿ ಆರೋಪಿಗಳಿಗೆ ಯಾವ ಮೂಲಗಳಿಂದ ಮಾದಕ ವಸ್ತುಗಳ ಸರಬರಾಜಾಗುತ್ತಿರುವ ಬಗ್ಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಲು ಸೂಚಿಸಲಾಗಿದ್ದು, ಇಂತಹ ಕೃತ್ಯಗಳಲ್ಲಿ ತೊಡಗಿರುವ ವಿದೇಶಿಯರನ್ನು ದಸ್ತಿಗಿರಿ ಮಾಡಿ ಅವರುಗಳ ಪಾಸ್‌ಪೋರ್ಟ್‌ಗಳನ್ನು ಮುಟ್ಟುಗೋಲು ಹಾಕಿಕೊಂಡು ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ. ವಿದೇಶಿಯರು ವಾಸದ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ಪೊಲೀಸ್ ಠಾಣೆಗಳಿಗೆ ಒದಗಿಸುವಂತೆ ಈಗಾಗಲೇ ಸುತ್ತೋಲೆಗಳನ್ನು ಹೊರಡಿಸಲಾಗಿದೆ. ವಿಶೇಷ ಕಾರ್ಯಚರಣೆಗಳನ್ನು ನಡೆಸಿ ಇಂತಹ ಕೃತ್ಯವೆಸಗುವಂತಹವರ ವಿರುದ್ಧ ಕಠಿಣ ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ.

- ಈ ಸಂಬಂಧ ಸಾಮಾಜಿಕ ಜಾಲ ತಾಣಗಳ ಮೂಲಕ ಈಗಾಗಲೇ ಸದರಿ ಮಾಹಿತಿಯನ್ನು ಪ್ರಚಾರ ಮಾಡಲಾಗಿರುತ್ತದೆ. ಜಾಹಿರಾತು ಫಲಕ, ಬ್ಯಾನರ್ಸ್ ಮತ್ತು ಸ್ಟಿಕ್ಕರ್‌ಗಳನ್ನು ಮುದ್ರಣ ಮಾಡಿಸಿ ಎಲ್ಲಾ ವಿಭಾಗೀಯ ಉಪ ಪೊಲೀಸ್ ಆಯುಕ್ತರುಗಳಿಗೆ, ಈ ಸಂಬಂಧ ಎಲ್ಲಾ ವಿಧ್ಯಾ ಸಂಸ್ಥೆಗಳು ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಭಿತ್ತರಿಸಿ ಅರಿವು ಮೂಡಿಸುವ ಕ್ರಮ ತೆಗೆದುಕೊಳ್ಳುವಂತೆ ಸೂಚಿಸಲಾಗಿದೆ.

- ಪೊಲೀಸ್ ಇಲಾಖೆಯಲ್ಲದೆ ಸಾರ್ವಜನಿಕ ಶಿಕ್ಷಣ ಇಲಾಖೆ, ಕುಟುಂಬ ಕಲ್ಯಾಣ ಇಲಾಖೆ, ತಾಂತ್ರಿಕ ಶಿಕ್ಷಣ ಇಲಾಖೆ ಹಾಗೂ ಇತರೆ ಇಲಾಖೆಗಳಿಗೂ ಸಹಾ ಜಾಹಿರಾತು ಫಲಕ, ಬ್ಯಾನರ್ಸ್ ಮತ್ತು ಸ್ಟಿಕ್ಕರ್ ಗಳನ್ನು ನೀಡಿ ಈ ಸಂಬಂಧ ಅರಿವು ಮೂಡಿಸುವ ಬಗ್ಗೆ ಕ್ರಮಕೈಗೊಳ್ಳುವಂತೆ ಕೋರಲಾಗಿದೆ. ಹೀಗೆ ಮುದ್ರಿಸಲಾಗಿರುವ ಜಾಹಿರಾತು ಫಲಕ, ಬ್ಯಾನರ್ಸ್ ಮತ್ತು ಸ್ಟಿಕ್ಕರ್ ಗಳನ್ನು ಪತ್ರಿಕಾ ಗೋಷ್ಠಿ ನಡೆಸಿ ಬಿಡುಗಡೆ ಮಾಡಲಾಗಿದೆ ಹಾಗೂ ದಿನ ಪತ್ರಿಕೆಗಳಲ್ಲಿ ಹಾಗೂ ದೃಶ್ಯ ಮಾಧ್ಯಮಗಳ ಮೂಲಕ ಜಾಹಿರಾತು ನೀಡಲಾಗಿದೆ.

- ಮಾದಕ ವಸ್ತುಗಳ ಮಾರಾಟಜಾಲವನ್ನು ನಿಯಂತ್ರಿಸಲು ಎಲ್ಲಾ ಘಟಕಾಧಿಕಾರಿಗಳಿಗೆ ಕಾಲಕಾಲಕ್ಕೆ ನಿರ್ದೇಶನಗಳನ್ನು ನೀಡಲಾಗುತ್ತಿದೆ.

- ಮಾದಕ ವಸ್ತುಗಳ ಅಕ್ರಮ ಸಾಗಾಣಿಕೆ ಮತ್ತು ಮಾರಾಟ ತಡೆಗಟ್ಟುವ ಸಲುವಾಗಿ, ಠಾಣಾ ಮಟ್ಟದಲ್ಲಿ ಗೌಪ್ಯ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಮಾದಕದ್ರವ್ಯ (ಡ್ರಗ್ಸ್) ಹಾವಳಿಯನ್ನು ತಡೆಗಟ್ಟಲು ಸೂಕ್ತ ನಿಗಾವಹಿಸಿ ಮಾದಕ ದ್ರವ್ಯಗಳ ಮಾರಾಟ ಮತ್ತೆ ಸೇವಿಸುವವರ ಬಗ್ಗೆ ಮಾಹಿತಿ ಸಂಗ್ರಹಿಸಲಾಗುತ್ತಿರುತ್ತದೆ. ಈ ಬಗ್ಗೆ ಬಾತ್ಮಿದಾರರಿಗೂ ಸಹ ಮಾಹಿತಿಯನ್ನು ನೀಡುವಂತೆ ಸೂಚಿಸಿರುತ್ತದೆ. ಅಧಿಕಾರಿ ಸಿಬ್ಬಂದಿಗಳಿಗೆ ಮಾದಕದ್ರವ್ಯ (ಡ್ರಗ್ಸ್)ಗಳ ಮಾರಾಟ ಮತ್ತು ಸೇವಿಸುವವರ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ, ತಲೆಮರೆಸಿಕೊಂಡಿರುವ ಆರೋಪಿಗಳನ್ನು ಪತ್ತೆಹಚ್ಚಲು ಸೂಕ್ತ ತಿಳುವಳಿಕೆ ನೀಡಲಾಗಿರುತ್ತದೆ.

- ಎನ್.ಡಿ.ಪಿ.ಎಸ್ ಕಾಯ್ದೆ ಅಡಿಯಲ್ಲಿ ದಾಖಲಾದ ಎಲ್ಲಾ ಆರೋಪಿಗಳಿಗೆ ಎಂ.ಓ.ಬಿ.ಯನ್ನು ತೆರೆಯಲಾಗುತ್ತಿದ್ದು, ಮತ್ತು ಆರೋಪಿತನ ಪೂರ್ಣ ಮಾಹಿತಿಯನ್ನೊಳಗೊಂಡ ತನಿಖಾವರದಿಯನ್ನು ಸಂಗ್ರಹಿಸಿಡಲಾಗುತ್ತಿದೆ.

- ಮಾದಕ ವಸ್ತುಗಳ ವ್ಯಸನಿಗಳನ್ನು ಗುರುತಿಸಿ ಆರೋಗ್ಯ ಮತ್ತುಕುಟುಂಬ ಕಲ್ಯಾಣ ಇಲಾಖೆ ಮುಖಾಂತರ ಡಿ–ಅಡಿಕ್ಷನ್ ಸೆಂಟರ್‌ಗಳಿಗೆ ಸೇರಿಸಲು ಕ್ರಮವಹಿಸಲಾಗುತ್ತಿದೆ.

- ಠಾಣಾ ಸರಹದ್ದುಗಳಲ್ಲಿ ಗಸ್ತು ಅಧಿಕಾರಿ ಮತ್ತು ಸಿಬ್ಬಂದಿಗಳು ಗಸ್ತಿನಲ್ಲಿರುವ ಸಮಯದಲ್ಲಿ ಶಾಲಾ, ಕಾಲೇಜುಗಳ ಬಳಿ ಸೂಕ್ಷ್ಮವಾಗಿ ಗಮನಿಸಿ ಅಪರಿಚಿತ ವ್ಯಕ್ತಿಗಳ ಮಾಹಿತಿ ಸಂಗ್ರಹಿಸುವಂತೆ ಸೂಚಿಸಲಾಗಿದೆ. ಮಾದಕದ್ರವ್ಯ ಪದಾರ್ಥಗಳ ವಹಿವಾಟನ್ನುತಡೆಗಟ್ಟಲು ಹಾಗು ಪತ್ತೆಮಾಡಲು ಹಾಗು ಹದಿಯರೆಯದ ಯುವಕ ಮತ್ತು ಯುವತಿಯರನ್ನು ಇಂತಹ ದುಶ್ಚಟಗಳಿಂದ ತಡೆಗಟ್ಟುವ ಸಲುವಾಗಿ ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ಮಾಡಲಾಗುತ್ತಿದೆ.

- ಶಾಲಾ ಕಾಲೇಜುಗಳ ಹತ್ತಿರ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಸಿಗರೇಟ್ ಮತ್ತು ತಂಬಾಕು ಪದಾರ್ಥಗಳನ್ನು ಮಾರಾಟ ಮಾಡುತ್ತಿರುವ ಹಾಗೂ ಅಲ್ಲಿಯೇ ಸಾರ್ವಜನಿಕವಾಗಿ ಸಿಗರೇಟ್ ಸೇವನೆ ಮಾಡುವವರ ವಿರುದ್ಧದಂಡವನ್ನು ವಿಧಿಸುವುದರ ಮೂಲಕ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ಮಾಡುವುದನ್ನು ತಡೆಗಟ್ಟುವುದು ಮತ್ತುಜಾಗೃತಿ ಮೂಡಿಸುವುದರ ಬಗ್ಗೆ ಹೆಚ್ಚಿನ ಗಮನಹರಿಸಲು ಸೂಚಿಸಲಾಗಿದೆ.